## ಕರ್ನಾಟಕ ವಿಧಾನಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 528
2. ಸದಸ್ಯರ ಹೆಸರು : ಶ್ರೀ ಕೆ.ಟಿ.ಶ್ರೀಕಂಠೇಗೌಡ
3. ಉತ್ತರಿಸಬೇಕಾದ ದಿನಾಂಕ : 16.09.2021
4. ಉತ್ತರಿಸುವ ಸಚಿವರು : ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು.

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಸಣ್ಣ ನೀರಾವರಿ ಇಲಾಖಾ ವ್ಯಾಪ್ತಿಗೆ ಬರುವ ಕೆರೆಗಳೆಷ್ಟು; (ವಿವರ ನೀಡುವುದು) | ಸಣ್ಣ ನೀರಾವರಿ ಇಲಾಖೆ ವ್ಯಾಪ್ತಿಯಲ್ಲಿ ಒಟ್ಟು 3753 ಕೆರೆಗಳಿರುತ್ತವೆ. ವಿವರಗಳನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| ಆ. | ಆ ಕೆರೆಗಳ ವಿಸ್ತೀರ್ಣ ಎಷ್ಟು; ಇದರಲ್ಲಿ ಒತ್ತುವರಿಯಾದ ಕೆರೆಗಳು ಎಷ್ಟು; (ವಿವರ ನೀಡುವುದು) | ಈ ಕೆರೆಗಳ ವಿಸ್ತೀರ್ಣ 253445.87 ಹೆಕ್ಟೇರ್. ಅವುಗಳಲ್ಲಿ 1092 ಕೆರೆಗಳು ಒತ್ತುವರಿಯಾಗಿರುತ್ತವೆ. ವಿವರಗಳನ್ನು ಅನುಬಂಧ-2 ರಲ್ಲಿ ನೀಡಲಾಗಿದೆ. |
| ಇ | ಸದರಿ ಕೆರೆ ಕಟ್ಟೆಗಳನ್ನು ಸರ್ವೆ ಮಾಡಿ ಒತ್ತುವರಿಯನ್ನು ತೆರವುಗೊಳಿಸುವ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಸಣ್ಣ ನೀರಾವರಿ ಇಲಾಖಾ ವ್ಯಾಪ್ತಿಯಲ್ಲಿ 3753 ಕೆರೆಗಳ ಪೈಕಿ 415 ಕೆರೆಗಳಿಗೆ ಸರ್ವೆ ಕಾರ್ಯ ಅವಶ್ಯಕತೆ ಇರುವುದಿಲ್ಲ, ಉಳಿದಂತೆ ಕೆರೆಗಳಲ್ಲಿ ಇದುವರೆಗೂ 2,488 ಕೆರೆಗಳ ಸರ್ವೆ ಕಾರ್ಯ ಕೈಗೊಂಡಿದ್ದು, ಅವುಗಳಲ್ಲಿ 1,092 ಕೆರೆಗಳಿಂದ 12,328.323 ಹೆಕ್ಟೇರ್ ಪ್ರದೇಶ ಒತ್ತುವರಿಯಾಗಿರುತ್ತದೆ. ಇವುಗಳ ಪೈಕಿ ಇದುವರೆವಿಗೂ ಒಟ್ಟು 977 ಕೆರೆಗಳ ಒಟ್ಟು 11,587.953 ಹೆಕ್ಟೇರ್ ಪ್ರದೇಶ ತೆರವುಗೊಳಿಸಲಾಗಿದೆ. ವಿವರಗಳನ್ನು ಅನುಬಂಧ-2ರಲ್ಲಿ ನೀಡಲಾಗಿದೆ.<br>ಕೆರೆ ಒತ್ತುವರಿಗೆ ಒಳಗಾಗಿರುವ ಸಣ್ಣ ನೀರಾವರಿ ಕೆರೆಗಳ ಒತ್ತುವರಿಯನ್ನು ತೆರವುಗೊಳಿಸಲು ಕೆರೆಯಂಗಳದ ಸುತ್ತಲೂ ಬೌಂಡರಿ ಟ್ರೆಂಚ್ ನಿರ್ಮಿಸುವುದು, ಕಾಂಟೂರ್ ಬಂಡ್ ನಿರ್ಮಾಣ, ಫೆನ್ಸಿಂಗ್ ಅಳವಡಿಕೆ ಹಾಗು ಬೌಂಡರಿ ಕಲ್ಲುಗಳನ್ನು ನೆಟ್ಟು ಕೆರೆಯಂಗಳಗಳ ಪ್ರದೇಶವನ್ನು ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಈ | ಈ ಕೆರೆಗಳ ಹೂಳು ತೆಗೆದು ಅಭಿವೃದ್ಧಿ ಪಡಿಸುವಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ಒದಗಿಸುವುದು) | ಕೆರೆಗಳ ಹೂಳು ತೆಗೆದು ಅಭಿವೃದ್ಧಿಪಡಿಸುವ ಕಾರ್ಯವು ನಿರಂತರ ಪ್ರಕ್ರಿಯೆಯಾಗಿದ್ದು, ಪ್ರತಿ ವರ್ಷ ಸಣ್ಣ ನೀರಾವರಿ ಇಲಾಖೆಗೆ ವಿವಿಧ ಲೆಕ್ಕಶೀರ್ಷಿಕೆಗಳಡಿ ಒದಗಿಸಲಾಗುವ ಅನುದಾನವನ್ನು ಆಧರಿಸಿ, ಕೆರೆಗಳ ಅಭಿವೃದ್ಧಿ ಹಾಗೂ ಹೂಳು ತೆಗೆಯುವ ಅವಶ್ಯಕತೆಗೆ ಅನುಗುಣವಾಗಿ ಹೂಳು ತೆಗೆಯುವ ಅಂಶವು ಸೇರಿದಂತೆ ಕೆರೆಗಳ ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. ಕಳೆದ 3 ವರ್ಷಗಳಲ್ಲಿ ಕೈಗೊಳ್ಳಲಾದ ಕೆರೆಗಳ ಅಭಿವೃದ್ಧಿ ಕಾಮಗಾರಿಗಳ ವಿವರಗಳನ್ನು ಅನುಬಂಧ-3ರಲ್ಲಿ ನೀಡಲಾಗಿದೆ. |

ಸಂಖ್ಯೆ: MID 98 LCQ 2021

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ
ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು.